# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 388 |
| ಮಾನ್ಯ ಸದಸ್ಯರ ಹೆಸರು | ಶ್ರೀ ಪಿ.ಆರ್. ರಮೇಶ್ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 18.02.2022 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ನೆಲೆಸಿರುವ ತಿಗಳ ಹಾಗೂ ಉಪಜಾತಿಗಳು ಮತ್ತು ಮಾಳಿ ಹಾಗೂ ಉಪ ಜಾತಿಗಳು ಪ್ರಸ್ತುತ 2ಎ ಪ್ರವರ್ಗದಲ್ಲಿದ್ದು, ಸದರಿ ಜಾತಿಗಳು ಶೈಕ್ಷಣಿಕವಾಗಿ / ಆರ್ಥಿಕವಾಗಿ ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಬಹಳಷ್ಟು ಹಿಂದುಳಿದಿದ್ದು. ಸದರಿ ಜನಾಂಗವನ್ನು ಹಿಂದುಳಿದ ಜಾತಿಗಳ ಪ್ರವರ್ಗ-2ಎ ರಿಂದ ಪ್ರವರ್ಗ-1ಕ್ಕೆ ಬದಲಾಯಿಸಿ ಸೇರಿಸಲು ಸರ್ಕಾರದಿಂದ ಕ್ರಮ ಕೈಗೊಳ್ಳಲಾಗಿದೆಯೇ: (ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ಸಕಇ 225 ಬಿಸಿಎ 2000, ದಿನಾಂಕ:30.03.2002ರಲ್ಲಿ ತಿಗಳ ಮತ್ತು ಅದರ ಉಪಜಾತಿಗಳು ಪ್ರವರ್ಗ-2ಎ ರ ಅನುಕ್ರಮ ಸಂಖ್ಯೆ:10ರಲ್ಲಿ ಹಾಗೂ ಮಾಳಿ ಮತ್ತು ಅದರ ಉಪಜಾತಿಗಳು ಪ್ರವರ್ಗ-2ರ ಅನುಕ್ರಮ ಸಂಖ್ಯೆ:40ರಲ್ಲಿ ಸೇರಿಸಲಾಗಿದೆ.<br><br>ಶ್ರೀ ಕೆ.ಜಯಪ್ರಕಾಶ ಹೆಗ್ಡೆ ಇವರ ನೇತೃತ್ವದ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ದಿನಾಂಕ: 23.11.2020 ರಂದು ಸರ್ಕಾರದಿಂದ ನೇಮಕಗೊಂಡಿರುತ್ತದೆ. ತಿಗಳ ಮತ್ತು ಅದರ ಉಪಜಾತಿಗಳನ್ನು ಹಾಗೂ ಮಾಳಿ ಮತ್ತು ಅದರ ಉಪಜಾತಿಗಳನ್ನು ಪ್ರವರ್ಗ-2ಎ ಯಿಂದ ಪ್ರವರ್ಗ-1 ಬದಲಾಯಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಆ) | ಈಗಾಗಲೇ ಹಿಂದುಳಿದ ಶಾಶ್ವತ ಹಿಂದುಳಿದ ಆಯೋಗದಿಂದ ತಿಗಳ ಮತ್ತು ಉಪಜಾತಿಗಳನ್ನು ಪ್ರವರ್ಗ-1ಕ್ಕೆ ಬದಲಾಯಿಸಲು ಶಿಫಾರಸ್ಸು ಮಾಡಲಾಗಿದೆಯೇ; ಮಾಡಿದ್ದಲ್ಲಿ ಸರ್ಕಾರದ ಕ್ರಮವೇನು: (ವಿವರ ನೀಡುವುದು) | ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಹಿಂದಿನ ಆಯೋಗಗಳು ಸಲ್ಲಿಸಿದ್ದ ವರದಿಗಳು ಸರ್ಕಾರದಲ್ಲಿ ಪರಿಶೀಲನೆಯಲ್ಲಿವೆ. |
| ಇ) | ತಿಗಳ ಹಾಗೂ ಉಪಜಾತಿಗಳ ಮತ್ತು ಮಾಳಿ ಹಾಗೂ ಉಪಜಾತಿಗಳ ಸರ್ವತೋಮುಖ ಏಳಿಗೆಗೆ ಸರ್ಕಾರದಿಂದ ನಿಗಮ/ ಮಂಡಳಿಗಳನ್ನು ಸ್ಥಾಪಿಸಲು ಸರ್ಕಾರ ಉದ್ದೇಶಿಸಿದೆಯೇ (ವಿವರ ನೀಡುವುದು) | ರಾಜ್ಯದಲ್ಲಿನ ಇತರೆ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಕಲ್ಪಿಸಿ ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ:ಸಕಇ 225 ಬಿಸಿಎ 2000, ದಿನಾಂಕ:30.03.2002ರ ಹಿಂದುಳಿದ ವರ್ಗಗಳ ಮೀಸಲಾತಿ ಪಟ್ಟಿಯಲ್ಲಿನ ಪ್ರವರ್ಗ-2(ಎ) ನಲ್ಲಿ ತಿಗಳ ಮತ್ತು ಅದರ ಉಪಜಾತಿಗಳು ಹಾಗೂ ಮಾಳಿ ಮತ್ತು ಅದರ ಉಪಜಾತಿಗಳನ್ನು ಸೇರಿಸಲಾಗಿದೆ. ಜಾತಿಯನ್ನು ಸೇರಿಸಲಾಗಿದೆ.<br><br>ಸದರಿ ಜಾತಿಗಳನ್ನೂ ಒಳಗೊಂಡಂತೆ ಹಿಂದುಳಿದ ವರ್ಗಗಳ ಮೀಸಲಾತಿ ಪಟ್ಟಿಯಲ್ಲಿರುವ ಜಾತಿ/ಸಮುದಾಯಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈಗಾಗಲೇ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವತಿಯಿಂದ ವಿವಿಧ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸ ಲಾಗುತ್ತಿರುವುದರಿಂದ. ಈ ಸಮುದಾಯಗಳ ಅಭಿವೃದ್ಧಿ ನಿಗಮವನ್ನು ಸ್ಥಾಪನೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

| | | |
|---|---|---|
| ಈ) | ಕಳೆದ 5 ವರ್ಷಗಳಿಂದ ತಿಗಳ ಹಾಗೂ ಉಪಜಾತಿಗಳು ಮತ್ತು ಮಾಳಿ ಹಾಗೂ ಉಪಜಾತಿಗಳು ಸರ್ವತೋಮುಖ ಏಳಿಗೆಗೆ ಮತ್ತು ಹಿಂದುಳಿದ ವರ್ಗಗಳ ಪ್ರವರ್ಗ-2ಎ ರಿಂದ ಪ್ರವರ್ಗ-1ಕ್ಕೆ ಸೇರಿಸುವಂತೆ ಸರ್ಕಾರದ ಮುಂದೆ ಬಂದಂತಹ ಪ್ರಸ್ತಾವನೆಗಳ ವಿವರಗಳ ಜೊತೆಗೆ ಸದರಿ ಪ್ರಸ್ತಾವನೆಗಳಿಗೆ ಸರ್ಕಾರದಿಂದ ತೆಗೆದುಕೊಂಡ ಕ್ರಮಗಳೇನು: (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ತಿಗಳ ಹಾಗೂ ಉಪಜಾತಿಗಳು ಮತ್ತು ಮಾಳಿ ಹಾಗೂ ಉಪಜಾತಿಗಳನ್ನು ಪ್ರವರ್ಗ-2ಎ ರಿಂದ ಪ್ರವರ್ಗ-1ಕ್ಕೆ ಸೇರಿಸುವಂತೆ ಕೋರಿ ಸ್ವೀಕರಿಸಿದ ಮನವಿಗಳ ವಿವರ. |

| ಕ್ರ ಸಂ | ಮನವಿದಾರರ ಹೆಸರು | ಮನವಿ ದಿನಾಂಕ: | ವಿಷಯ |
|---|---|---|---|
| 1 | ಶ್ರೀ ಸುಬ್ಬಣ್ಣ ಬಿನ್ ಗೋವಿಂದಪ್ಪ, ಕರ್ನಾಟಕ ರಾಜ್ಯ ತಿಗಳ ಕ್ಷತ್ರಿಯರ ಮಹಾಸಭಾ (ರಿ), ಬೆಂಗಳೂರು-32. | 19.06.2019 | ತಿಗಳ ಹಾಗೂ ಉಪಜಾತಿಗಳನ್ನು ಪ್ರವರ್ಗ-2ಎ ಯಿಂದ ಪ್ರವರ್ಗ-1ಕ್ಕೆ ಸೇರಿಸುವ ಬಗ್ಗೆ. |
| 2 | ಶ್ರೀ ಪಿ.ಆರ್. ರಮೇಶ್ ಶಾಸಕರು, ಕರ್ನಾಟಕ ವಿಧಾನ ಪರಿಷತ್, ಶಾಸಕರ ಭವನ-5, 3ನೇ ಮಹಡಿ, ಕೊಠಡಿ ಸಂಖ್ಯೆ:3002, ಬೆಂಗಳೂರು. | 19.02.2021 | ತಿಗಳ, ಮಾಲಿ (ಮಾಳಿ) ಅದರ ಉಪ ಜಾತಿಗಳನ್ನು ಪ್ರವರ್ಗ-2ಎ ಯಿಂದ ಪ್ರವರ್ಗ-1ಕ್ಕೆ ಸೇರಿಸುವ ಬಗ್ಗೆ. |

ಶ್ರೀ ಕೆ.ಜಯಪ್ರಕಾಶ ಹೆಗ್ಡೆ ಇವರ ನೇತೃತ್ವದ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ದಿನಾಂಕ: 23.11.2020 ರಂದು ಸರ್ಕಾರದಿಂದ ನೇಮಕಗೊಂಡಿರುತ್ತದೆ. ಮೇಲ್ಕಂಡ ಮನವಿಗಳನ್ನು ಪರಿಶೀಲನೆಗಾಗಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗಕ್ಕೆ ಕಳುಹಿಸಿಕೊಡಲಾಗಿರುತ್ತದೆ.

ಸಂಖ್ಯೆ: ಇ-ಹಿಂವಕ 35 ಬಿಸಿಎ 2022

(ಕೋಟಾ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು